WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮೇ ೩೧, ೨೦೧೨ (ಜ್ಯೇಷ್ಠ ೧೦, ಶಕ ವರ್ಷ ೧೯೩೪) | ಸಂಚಿಕೆ ೨೨ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾಧಿಕಾರಿಯವರ ಕಾರ್ಯಾಲಯ, ಮೈಸೂರು ಜಿಲ್ಲೆ, ಮೈಸೂರು.

### OFFICE OF THE DEPUTY COMMISSIONER, MYSORE DISTRICT,MYSORE

**ಸಂ:ಗ್ರಾಲೆಸಿ/90/2010–11 ದಿನಾಂಕ: 5–5–2012**

**ಅಧಿಕೃತ ಜ್ಞಾಪನ**

**ವಿಷಯ** ಮೈಸೂರು ಜಿಲ್ಲಾ ಕಂದಾಯ ಘಟಕದ, ತಾಲ್ಲೂಕು ಕಛೇರಿಗಳಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಕಂ.ಇ. 299 ಬಿ.ಎಸ್.ಸಿ. 2006 ದಿನಾಂಕ 3–2–2009 ಹಾಗೂ 24–7–2009
2. ಸರ್ಕಾರದ ಪತ್ರ ಸಂ. ಕಂ.ಇ.04 ಬಿ.ಎಸ್.ಸಿ.2011 ದಿನಾಂಕ 25–2–2011
3. ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 2–4–2011 ಹಾಗೂ 16–5–2011
4. ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಕೃತಜ್ಞಾಪನ ದಿನಾಂಕ 11–7–2011 ಹಾಗೂ 4–8–2011
5. ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಕೃತಜ್ಞಾಪನ ದಿನಾಂಕ 12–9–2011 ಹಾಗೂ 5–12–2011
6. ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಕೃತಜ್ಞಾಪನ ದಿನಾಂಕ 1–2–2012

ಉಲ್ಲೇಖ (2)ರ ಸರ್ಕಾರದ ಪತ್ರದಲ್ಲಿ ಜಿಲ್ಲೆಯ ತಾಲ್ಲೂಕುಗಳಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು, ಸರ್ಕಾರವು ಅನುಮತಿ ನೀಡಿರುತ್ತದೆ. ಆ ಪ್ರಕಾರ ಉಲ್ಲೇಖ (1)ರ ಅಧಿಸೂಚನೆಯಂತೆ ಗ್ರಾಮಲೆಕ್ಕಿಗರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಿ ದಿನಾಂಕ 24–7–2009 ರಂದು ಪ್ರಕಟಿಸಿರುವಂತೆ ಖಾಲಿಯಿರುವ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆಯಂತೆ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು.

ಮೈಸೂರು ಜಿಲ್ಲೆಯ ತಾಲ್ಲೂಕು ಕಛೇರಿಗಳಲ್ಲಿ ಖಾಲಿಯಿರುವ 40 ಹುದ್ದೆಗಳನ್ನು ಭರ್ತಿ ಮಾಡಲು ಉಲ್ಲೇಖ (3)ರ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದ್ದು, ಆ ಪ್ರಕಾರ ಉಲ್ಲೇಖ (5) ರ ಅಧಿಕೃತಜ್ಞಾಪನದಲ್ಲಿ 39 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಿ ಆದೇಶ ಹೊರಡಿಸಲಾಗಿದೆ. ಯೋಜನಾ ನಿರಾಶ್ರಿತರ ಸಾಮಾನ್ಯ ಅಭ್ಯರ್ಥಿಯ 1 (ಒಂದು) ಹುದ್ದೆಗೆ ತಾತ್ಕಾಲಿಕ ಪರಿಶೀಲನಾ ಪಟ್ಟಿಯಲ್ಲಿ ಪ್ರಕಟಿಸಲಾದ 1:3 ಅಭ್ಯರ್ಥಿಗಳಲ್ಲಿ ಯಾರೂ ಬಾರದ ಕಾರಣ ಈ ಹುದ್ದೆಯ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿರುವುದಿಲ್ಲ.

ಉಲ್ಲೇಖ (5) ರಂತೆ ಭರ್ತಿ ಮಾಡಲಾದ 39 ಹುದ್ದೆಗಳಲ್ಲಿ, 29 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗಿದ್ದು, 10 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆದ್ದರಿಂದ, ಈ ಕಾರ್ಯಾಲಯದ ದಿನಾಂಕ 5–12–2011 ರ ಅಧಿಕೃತಜ್ಞಾಪನದಂತೆ ಹೊರಡಿಸಲಾಗಿದ್ದ ಸದರಿ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ.

ಈ ಕಾರ್ಯಾಲಯದ ದಿನಾಂಕ 1–2–2012 ರ ಅಧಿಕೃತಜ್ಞಾಪನದಲ್ಲಿ 10 ಅಭ್ಯರ್ಥಿಗಳ ಕಾಯ್ದಿರಿಸಿದ ಪಟ್ಟಿಯನ್ನು ಪ್ರಕಟಿಸಲಾಗಿದೆ ಹಾಗೂ ಸಾಮಾನ್ಯ ವರ್ಗದ ಯೋಜನಾ ನಿರಾಶ್ರಿತರ 1:3 ಅನುಪಾತದಲ್ಲಿ ಮೆರಿಟ್ ಆಧಾರದಲ್ಲಿ ಅಭ್ಯರ್ಥಿಗಳ ಹೆಚ್ಚುವರಿ ಪರಿಶೀಲನಾ ಪಟ್ಟಿಯನ್ನು ಪ್ರಕಟಿಸಲಾಗಿರುತ್ತದೆ. ಸದರಿ ಅಭ್ಯರ್ಥಿಗಳಲ್ಲಿ ವರ್ಗ:2ಬಿ ಗ್ರಾಮೀಣ,ಸಾಮಾನ್ಯ ಅಭ್ಯರ್ಥಿ (ಮಹಿಳೆ) ಹಾಗೂ ಯೋಜನಾ ನಿರಾಶ್ರಿತರ 3 ಅಭ್ಯರ್ಥಿಗಳು ಸೇರಿದಂತೆ ಒಟ್ಟು 5 ಅಭ್ಯರ್ಥಿಗಳನ್ನು ದಿನಾಂಕ 19–3–2012 ರಂದು ಮೂಲ ದಾಖಲಾತಿಗಳ ಪರಿಶೀಲನೆಗೆ ಹಾಜರಾಗುವಂತೆ ಸೂಚನೆ ನೀಡಲಾಗಿರುತ್ತದೆ. ಆ ಪ್ರಕಾರ ಸದರಿ ದಿನದಂದು ಹಾಜರಾದ 02 ಅಭ್ಯರ್ಥಿಗಳ ಮೂಲ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ. ಈ ಹಿಂದೆ, ಮೂಲ ದಾಖಲಾತಿಗಳ ಪರಿಶೀಲನೆಗೆ ಹಾಜರಾದ 08 ಅಭ್ಯರ್ಥಿಗಳು ಕಾಯ್ದಿರಿಸಿದ ಪಟ್ಟಿಯಲ್ಲಿದ್ದು, ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಬೇಕಾಗಿರುತ್ತದೆ ಹಾಗೂ ಸಾಮಾನ್ಯ ವರ್ಗದ ಅಭ್ಯರ್ಥಿಯಾದ ಕು. ಶೃತಿ ಎಸ್. ಇವರು ಮೂಲ ದಾಖಲಾತಿ ಪರಿಶೀಲನೆಗೆ ಹಾಜರಾಗಿರುವುದಿಲ್ಲ. ಆದ್ದರಿಂದ ಜಿ.ಎಂ.(W) 01 ಹುದ್ದೆಯನ್ನು ಹೊರತುಪಡಿಸಿ 10 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಬೇಕಾಗಿರುತ್ತದೆ.

ಮೇಲೆ ವಿವರಿಸಿರುವ ಅಂಶಗಳನುಸಾರ ಕಾಯ್ದಿರಿಸಿದ ಪಟ್ಟಿಯಲ್ಲಿರುವ ಕೆಳಕಂಡ 09 ಅಭ್ಯರ್ಥಿಗಳು ಹಾಗೂ ಯೋಜನಾ ನಿರಾಶ್ರಿತರ ಸಾಮಾನ್ಯ ವರ್ಗದ 01 ಅಭ್ಯರ್ಥಿ ಸೇರಿದಂತೆ ಒಟ್ಟು 10 ಅಭ್ಯರ್ಥಿಗಳಿಗೆ ಪೂರ್ವಚರಿತ್ರೆ ವರದಿ ಹಾಗೂ ಸಿಂಧುತ್ವ ಪ್ರಮಾಣ ಪತ್ರ ಪಡೆಯುವ ಷರತ್ತಿಗೊಳಪಡಿಸಿ, ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿ ರೂ 11600–21000 ರಲ್ಲಿ ನೇಮಕಾತಿ ಮಾಡಿ ಅವರ ಹೆಸರಿನ ಮುಂದೆ ನಮೂದಿಸಲ್ಪಟ್ಟಿರುವ ಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳಿಗನುಸಾರ ನೇಮಕಗೊಳಿಸಿ ಆದೇಶಿಸಿದೆ.

| ಕ್ರ ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ | ನೇಮಕಗೊಳಿಸಿ ಹುದ್ದೆ ಮತ್ತು ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ಕಛೇರಿ |
|---|---|---|---|---|
| 1 | ನಂದಿನಿ ಬಿ. ಬಿನ್ ಮಂಜುನಾಥ ಬಿ., ನಿಂಬಳಗೆರೆ, ನಿಂಬಳಗೆರೆ ಅಂಚೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ–583136 | 2ಎ (R) | ಗ್ರಾಮಲೆಕ್ಕಿಗರು ಭೂಮಿ ಕೇಂದ್ರ, ತಾಲ್ಲೂಕು ಕಛೇರಿ,ಹುಣಸೂರು | ತಹಸೀಲ್ದಾರ್‌ರವರ ಕಛೇರಿ, ಹುಣಸೂರು ತಾಲ್ಲೂಕು |
| 2. | ಶೃತಿ ಬಿ.ಹೆಚ್. ಬಿನ್ ಹರೀಶ್ ಬಿ.ಆರ್. ಚಕ್ಕೇರಾ ಹೌಸ್ ಹತ್ತಿರ, ಐ.ಟಿ.ಐ. ಹಿಂಭಾಗ, ಮಡಿಕೇರಿ, ಕೊಡಗು ಜಿಲ್ಲೆ–571201 | 2ಎ (W) | ಗ್ರಾಮಲೆಕ್ಕಿಗರು ಚೌತಿ ವೃತ್ತ ತಾಲ್ಲೂಕು ಕಛೇರಿ, ಪಿರಿಯಾಪಟ್ಟಣ | ತಹಸೀಲ್ದಾರ್‌ರವರ ಕಛೇರಿ, ಪಿರಿಯಾಪಟ್ಟಣ ತಾಲ್ಲೂಕು |
| 3. | ಗಗನ್ ಬಿ.ಎಸ್. ಬಿನ್ ಶಿವರಾಜು ಬಿ.ಎಸ್., ಬೋಪಟ್ಟಿ ಗ್ರಾಮ, ಚಿಟ್ಟಿಮನಿ ಅಂಚೆ, ಮಡೀಕೇರಿ, ಕೊಡಗು ಜಿಲ್ಲೆ–571201 | 2ಎ (O) | ಗ್ರಾಮಲೆಕ್ಕಿಗರು ಹಿಟ್ನ ಹೆಬ್ಬಾಗಿಲು ವೃತ್ತ ತಾಲ್ಲೂಕು ಕಛೇರಿ, ಪಿರಿಯಾಪಟ್ಟಣ | ತಹಸೀಲ್ದಾರ್‌ರವರ ಕಛೇರಿ, ಪಿರಿಯಾಪಟ್ಟಣ ತಾಲ್ಲೂಕು |
| 4. | ರೆಹನಾಭಾನು ಬಿನ್ ಇಬ್ರಾಹಿಂಖಾನ್, ಕೋಟೆ ಬೀದಿ, ಸಾಲಿಗ್ರಾಮ, ಕೆ.ಆರ್.ನಗರ ತಾಲ್ಲೂಕು–571604 | 2ಬಿ (R) | ಗ್ರಾಮಲೆಕ್ಕಿಗರು ಭೂಮಿ ಕೇಂದ್ರ, ತಾಲ್ಲೂಕು ಕಛೇರಿ, ಹುಣಸೂರು | ತಹಸೀಲ್ದಾರ್‌ರವರ ಕಛೇರಿ, ಹುಣಸೂರು ತಾಲ್ಲೂಕು |
| 5. | ದೊಡ್ಡಬಸವರಾಜು ಬೆನಕಲ್ ಬಿನ್ ವೀರಪ್ಪ ಬಿ., ಬಾವಿಹಳ್ಳಿ, ಚಿಗಟೇರಿ ಅಂಚೆ, ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ–583127 | 3ಬಿ (R) | ಗ್ರಾಮಲೆಕ್ಕಿಗರು, ಹೆಗ್ಗೂರು ವೃತ್ತ, ತಾಲ್ಲೂಕು ಕಛೇರಿ, ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 6. | ಶಿವಾನಂದ ಅಂಗಡಿ ಬಿನ್ ಶರಣಪ್ಪ ಅಂಗಡಿ, ದಿಂಡಾವಾರು ಗ್ರಾಮ, ಬಿ. ಬಾಗೇವಾಡಿ ತಾಲ್ಲೂಕು, ಬಿಜಾಪುರ ಜಿಲ್ಲೆ–586203 | ಜಿ.ಎಂ. (O) | ಗ್ರಾಮಲೆಕ್ಕಿಗರು ಬೆಳಾಡಿ ವೃತ್ತ, ತಾಲ್ಲೂಕು ಕಛೇರಿ, ಮೈಸೂರು | ತಹಸೀಲ್ದಾರ್‌ರವರ ಕಛೇರಿ, ಮೈಸೂರು ತಾಲ್ಲೂಕು |
| 7 | ರೇಖಾ ಬಿ ಬಿನ್ ಹಾಲಪ್ಪ ಹೆಚ್.ಬಿ., ಹರಳು ಅಂಚೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ–583 134 | ಜಿ.ಎಂ. (R) | ಗ್ರಾಮಲೆಕ್ಕಿಗರು ಗೋಪಾಲಪುರ ವೃತ್ತ, ತಾಲ್ಲೂಕು ಕಛೇರಿ, ಮೈಸೂರು | ತಹಸೀಲ್ದಾರ್‌ರವರ ಕಛೇರಿ, ಮೈಸೂರು ತಾಲ್ಲೂಕು |

| ಕ್ರ ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ | ನೇಮಕಗೊಳಿಸಿ ಹುದ್ದೆ ಮತ್ತು ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ಕಛೇರಿ |
|---|---|---|---|---|
| 8 | ಮಲ್ಲವ್ವ ಹೆಬ್ಬಾಳ್ ಬಿನ್ ಈರಪ್ಪ, ಹವ್ಯಾಸಿ, ಕೊಳಲು ಅಂಚೆ, ಹಾವೇರಿ ತಾಲ್ಲೂಕು, ಹಾವೇರಿ–583217 | ಜಿ.ಎಂ. (W). | ಗ್ರಾಮಲೆಕ್ಕಿಗರು ದುಗ್ಗಳ್ಳಿ ವೃತ್ತ ತಾಲ್ಲೂಕು ಕಛೇರಿ, ನಂಜನಗೂಡು | ತಹಸೀಲ್ದಾರ್‌ರವರ ಕಛೇರಿ, ನಂಜನಗೂಡು ತಾಲ್ಲೂಕು |
| 9 | ಮಹೇಂದ್ರ ಬಿ. ಬಿನ್ ಶಿವಣ್ಣ ಬಿ., ನೀಲವಾಣಿ ಗ್ರಾಮ, ಬೆನ್ನಹಳ್ಳಿ ಅಂಚೆ, ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ–583127 | ಜಿಎಂ. (R) | ಗ್ರಾಮಲೆಕ್ಕಿಗರು ಚಿದರವಳ್ಳಿ ವೃತ್ತ ತಾಲ್ಲೂಕು ಕಛೇರಿ, ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 10 | ರಶ್ಮಿ ಹೆಚ್.ಆರ್ ಬಿನ್ ರೇಣುಕಾರಾಧ್ಯ, ಬನದಹಳ್ಳಿ ಗ್ರಾಮ, ಕರಗದ ಅಂಚೆ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ–573115 | ಜಿ.ಎಂ. (P.D.P.) | ಗ್ರಾಮಲೆಕ್ಕಿಗರು ಹರದನಹಳ್ಳಿ ವೃತ್ತ ತಾಲ್ಲೂಕು ಕಛೇರಿ, ಕೆ.ಆರ್.ನಗರ | ತಹಸೀಲ್ದಾರ್‌ರವರ ಕಛೇರಿ, ಕೆ.ಆರ್.ನಗರ ತಾಲ್ಲೂಕು |

**ನಿಬಂಧನೆಗಳು**

1 ಈ ನೇಮಕಾತಿಯು ಘನ ಕರ್ನಾಟಕ ಆಡಳಿತ ನ್ಯಾಯಾಧೀಕರಣದಲ್ಲಿ ದಾಖಲಾಗಿರುವ ಅರ್ಜಿ ಸಂಖ್ಯೆ: 5898/2009 ರ ಪ್ರಕರಣದ ಅಂತಿಮ ತೀರ್ಪಿನನ್ವಯ ಮಾರ್ಪಡಿಸುವ ಷರತ್ತಿಗೊಳಪಟ್ಟಿದೆ

2 ಅಭ್ಯರ್ಥಿಯು ಈ ಆದೇಶದ ದಿನಾಂಕದಿಂದ 15 ದಿನದೊಳಗಾಗಿ ಸಂಬಂಧಿಸಿದ ತಹಸೀಲ್ದಾರ್‌ರವರ ಸಮಕ್ಷಮ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ತಪ್ಪಿದಲ್ಲಿ ಈ ಆದೇಶವು ಸ್ವಯಂಚಾಲಿತವಾಗಿ ರದ್ದುಗೊಳ್ಳುವುದು.

3 ಅಭ್ಯರ್ಥಿಯು ಹುಟ್ಟಿದ ದಿನಾಂಕ ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮೀಸಲಾತಿ ಪ್ರಮಾಣ ಪತ್ರಗಳ ಮೂಲ ದಾಖಲೆಗಳನ್ನು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಹಾಜರುಪಡಿಸತಕ್ಕದ್ದು.

4 ಅಭ್ಯರ್ಥಿಯು ತನ್ನ ವಾಸಸ್ಥಳ ಕ್ಷೇತ್ರಕ್ಕೆ ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಹಾಜರುಪಡಿಸತಕ್ಕದ್ದು.

5 ಮೀಸಲಾತಿಯಡಿ ಆಯ್ಕೆಯಾಗಿರುವ ಅಭ್ಯರ್ಥಿಗಳು ಸಂಬಂಧಪಟ್ಟ ಪ್ರಾಧಿಕಾರದಿಂದ ನೀಡುವ ಸಿಂಧುತ್ವ ಪ್ರಮಾಣ ಪತ್ರ ಪಡೆಯುವ ಷರತ್ತಿಗೊಳಪಟ್ಟು ನೇಮಕಾತಿ ಆದೇಶ ನೀಡಲಾಗಿದ್ದು, ಸಂಬಂಧಪಟ್ಟ ಪ್ರಾಧಿಕಾರದಿಂದ ವ್ಯತಿರಿಕ್ತ ವರದಿ ಬಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವು ರದ್ದುಪಡಿಸುವ ಷರತ್ತಿಗೊಳಪಟ್ಟಿರುತ್ತದೆ.

6 ಅಭ್ಯರ್ಥಿಗಳು ವಾಸವಾಗಿರುವ ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳಿಗೆ ಅಭ್ಯರ್ಥಿಯ ಪೂರ್ವಚರಿತ್ರೆ / ನಡತೆ ಬಗ್ಗೆ ಪರಿಶೀಲಿಸಿ ವರದಿ ನೀಡಲು ಕೋರಲಾಗಿದ್ದು, ಸಂಬಂಧಪಟ್ಟ ಪ್ರಾಧಿಕಾರದಿಂದ ವ್ಯತಿರಿಕ್ತ ಬಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವು ರದ್ದುಪಡಿಸುವ ಷರತ್ತಿಗೊಳಪಟ್ಟಿರುತ್ತದೆ.

7 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಅವಧಿ ಪರಿವೀಕ್ಷಣಾ ಅವಧಿಗೆ ಒಳಪಟ್ಟಿದ್ದು, ಈ ಅವಧಿಯಲ್ಲಿ ಅಕೌಂಟ್ಸ್ ಲೋಯರ್ / ರೆವಿನ್ಯೂ ಲೋಯರ್ ಮತ್ತು ಕನ್ನಡ ಭಾಷಾ ಪರೀಕ್ಷೆ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದತಕ್ಕದ್ದು.

8 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸತಕ್ಕದ್ದು.

9 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಸರ್ಕಾರಿ ವೈದ್ಯಾಧಿಕಾರಿಗಳಿಂದ ಸರ್ಕಾರಿ ಸೇವೆ ಸಲ್ಲಿಸಲು ದೈಹಿಕವಾಗಿ ಅರ್ಹರಾಗಿರುವ ಬಗ್ಗೆ ಪಡೆದ ವೈದ್ಯಕೀಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರುಪಡಿಸತಕ್ಕದ್ದು.

10 ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ: FD (Spl). 04.PET2005 dated 31-3-2006 ರಲ್ಲಿ ಜಾರಿಗೊಳಿಸಿದಂತೆ ಹೊಸ ನಿವೃತ್ತಿ ವೇತನ ನಿಯಮಕ್ಕೆ ಒಳಪಟ್ಟಿರುತ್ತಾರೆ.

11 ಸರ್ಕಾರದ ಸುತ್ತೋಲೆ ಸಂ: ಕಂ.ಇ.54. ಬಿ.ಎಸ್.ಸಿ.2007 ದಿನಾಂಕ 27–3–2007ರನ್ವಯ ಅಂತರಜಿಲ್ಲಾ ವರ್ಗಾವಣೆಗೆ ಕನಿಷ್ಠ ಐದು ವರ್ಷಗಳ ಸೇವೆಯನ್ನು ಈ ಜಿಲ್ಲೆಯಲ್ಲಿ ಕಡ್ಡಾಯವಾಗಿ ಪೂರ್ಣಗೊಳಿಸಿದಲ್ಲಿ ಮಾತ್ರ ಅರ್ಹರಾಗಿರುತ್ತಾರೆ.

12 ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೊಂದಾಯಿಸಿದ ಗುರುತಿನ ಚೀಟಿಯನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.

13 ಅಭ್ಯರ್ಥಿಗಳು ಸೇವೆಗೆ ಸೇರಿದ ದಿನಾಂಕದಿಂದ ಮಾತ್ರ ಹುದ್ದೆಯಲ್ಲಿ ಜೇಷ್ಠತೆಯನ್ನು ಹೊಂದಲು ಅರ್ಹರಾಗಿರುತ್ತಾರೆ.

14 ಅಭ್ಯರ್ಥಿಗಳು ತಾಲ್ಲೂಕು ಕಛೇರಿಯ ತಾಲ್ಲೂಕು ಕಛೇರಿಗೆ ನೇಮಕಾತಿ ಹೊಂದಿರುವುದರಿಂದ ಗ್ರಾಮಲೆಕ್ಕಿಗರ ಹುದ್ದೆಯಿಂದ ಪದೋನ್ನತಿ ಹೊಂದುವವರೆಗೂ ಗ್ರಾಮಲೆಕ್ಕಿಗರಾಗಿ ಕಾರ್ಯ ನಿರ್ವಹಿಸಬೇಕಾಗಿದ್ದು, ಯಾವುದೇ ಕಾರಣಕ್ಕೂ ವೃಂದ ಬದಲಾವಣೆಗೆ ಅವಕಾಶವಿರುವುದಿಲ್ಲ.

15 ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು ಹಾಗೂ ಇಲಾಖಾಧಿಕಾರಿಗಳು ನೀಡಿರುವ ನಿರಾಕ್ಷೇಪಣಾ ಪತ್ರವನ್ನು ಸಲ್ಲಿಸತಕ್ಕದ್ದು. ಅಂತಹ ಅಭ್ಯರ್ಥಿಗಳು ಇಲಾಖೆಯಿಂದ ಬಿಡುಗಡೆಯಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ಹಾಜರುಪಡಿಸತಕ್ಕದ್ದು.

16 ನೇಮಕಾತಿಗೊಳಿಸಲಾದ ಸ್ಥಳ / ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ. ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುತ್ತದೆ.

17 ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರಿಯವರಾದ, ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ರವರು, ಸದರಿ ಆದೇಶವನ್ನು ಮಾರ್ಪಡಿಸುವ ಹಾಗೂ ರದ್ದುಪಡಿಸುವ ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತಾರೆ.

ಅಧ್ಯಕ್ಷರು,
ಆಯ್ಕೆ ಪ್ರಾಧಿಕಾರ ಹಾಗೂ ನೇಮಕಾತಿ ಪ್ರಾಧಿಕಾರ
ಮತ್ತು ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು

**ಪಿ.ಆರ್. 84**

## ವಿಶೇಷ ನೇಮಕಾತಿ ಸಮಿತಿ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರು-560 009.**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಹಾಸ್ಪಿಟಲ್ ಅಟೆಂಡೆಂಟ್ ಗ್ರೇಡ್-2 ಗ್ರೂಪ್ 'ಡಿ' 2323 ಖಾಲಿ ಹುದ್ದೆಗಳಿಗೆ ನೇಮಕಾತಿ ಮಾಡುವ ಬಗ್ಗೆ.**

### ಅಧಿಸೂಚನೆ

**ಅಧಿಸೂಚನೆ ಸಂಖ್ಯೆ: ಎಸ್‌ಆರ್‌ಸಿ/57/2011-12, ದಿನಾಂಕ:31.05.2012**
**ಅರ್ಜಿಗಳನ್ನು ಆನ್-ಲೈನ್ ಮೂಲಕ ಸಲ್ಲಿಸಲು ಕೊನೆಯ ದಿನಾಂಕ:30.06.2012(ಸಂಜೆ 05:00 ಗಂಟೆಯ)ವರೆಗೆ**
**ಬ್ಯಾಂಕ್‌ನಲ್ಲಿ ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ:04.07.2012**

ಸರ್ಕಾರದ ಪತ್ರ ಸಂಖ್ಯೆ:ಆಕುಕ/342/ಹೆಚ್‌ಎಸ್‌ಎಂ/2009, ದಿ:01.12.2011 ಮತ್ತು ಸರ್ಕಾರದ ಕರಡು ನಿಯಮಾವಳಿ ಸಂಖ್ಯೆ:ಆಕುಕ/06/ಹೆಚ್‌ಎಸ್‌ಎಂ/2012, ದಿನಾಂಕ:29/03/2012ರಲ್ಲಿ ಹಾಗೂ ಸರ್ಕಾರದ ಅಂತಿಮ ನಿಯಮಾವಳಿ ಸಂಖ್ಯೆ:ಆಕುಕ/06/ಹೆಚ್‌ಎಸ್‌ಎಂ/ 2012, ದಿನಾಂಕ:23.04.2012ರಲ್ಲಿ ಜಾರಿಗೆ ಬಂದ ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು (ಗ್ರೂಪ್'ಡಿ' ಹುದ್ದೆಗಳ ನೇಮಕಾತಿ) (ವಿಶೇಷ) ನಿಯಮಗಳು 2012ರಲ್ಲಿ ರೂ.9600-200-12000-250-13000-300-14200-350-14550ರ ವೇತನ ಶ್ರೇಣಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಆಕುಕ/342/ಹೆಚ್‌ಎಸ್‌ಎಂ/2009, ದಿನಾಂಕ:07.05.2012ರಲ್ಲಿ ಅಧಿಸೂಚಿಸಿರುವ ಜಿಲ್ಲಾ ಆಸ್ಪತ್ರೆಗಳು, ತಾಲ್ಲೂಕು ಆಸ್ಪತ್ರೆಗಳು, ಸಮುದಾಯ ಆರೋಗ್ಯ ಕೇಂದ್ರಗಳು ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ಒಟ್ಟು 2323 ಹಾಸ್ಪಿಟಲ್ ಅಟೆಂಡೆಂಟ್ ಗೇಡ್-II ಗ್ರೂಪ್'ಡಿ' ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ವೆಬ್‌ಸೈಟ್ ವಿಳಾಸ www.karhfw.gov.in ನಲ್ಲಿ ON-LINE ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ.

1. ಪದನಾಮ, ವೇತನ ಶ್ರೇಣಿ, ಹುದ್ದೆಗಳ ಸಂಖ್ಯೆ, ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ ವೇತನ ಶ್ರೇಣಿ ಮತ್ತು ಒಟ್ಟು ಹುದ್ದೆಗಳು | ನಿಗದಿಪಡಿಸಿರುವ ಕನಿಷ್ಠ ವಿದ್ಯಾರ್ಹತೆ | ವಯೋಮಿತಿ |
|---|---|---|---|
| 1 | 2 | 3 | 4 |
| 1 | ಹಾಸ್ಪಿಟಲ್ ಅಟೆಂಡೆಂಟ್ ಗ್ರೇಡ್-II, ಗ್ರೂಪ್'ಡಿ' 2323 ಖಾಲಿ ಹುದ್ದೆಗಳು. <u>ವೇತನ ಶ್ರೇಣಿ</u> ರೂ.9600-200-12000-250-13000-300-14200-350-14550 | ಎಸ್.ಎಸ್.ಎಲ್.ಸಿ/ 10ನೇ ತರಗತಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು | ಕನಿಷ್ಠ :-18 ವರ್ಷಗಳು<br>ಗರಿಷ್ಠ<br>ಸಾ.ವ :-35 ವರ್ಷಗಳು,<br>ಪ್ರವರ್ಗ:- II(ಎ), II(ಬಿ),III(ಎ), III(ಬಿ):-38 ವರ್ಷಗಳು,<br>ಪ.ಜಾ, ಪ.ಪಂ & ಪ್ರವರ್ಗ- I:-40 ವರ್ಷಗಳು, |

**<u>ಆಯ್ಕೆ ವಿಧಾನ:–</u>** ಅಭ್ಯರ್ಥಿಗಳು ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಗಳಿಸಿರುವ ಅಂಕಗಳು ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

ಗ್ರೂಪ್'ಡಿ ಹುದ್ದೆಗಳು–2323(ವರ್ಗೀಕರಣ)

| ಪ್ರವರ್ಗ | ಸಾಮಾನ್ಯ | ಮಹಿಳಾ | ಗ್ರಾಮೀಣ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|
| ಸಾ.ಅರ್ಹತೆ | 233 | 348 | 290 | 116 | 58 | 58 | 58 | 1161 |
| ಪ.ಜಾತಿ | 70 | 105 | 88 | 34 | 17 | 17 | 18 | 349 |
| ಪ.ಪಂ | 14 | 21 | 18 | 7 | 3 | 3 | 4 | 70 |
| ಪ್ರವರ್ಗ–1 | 19 | 28 | 24 | 9 | 4 | 4 | 5 | 93 |
| ಪ್ರವರ್ಗ–II(ಎ) | 70 | 105 | 87 | 34 | 17 | 17 | 18 | 348 |
| ಪ್ರವರ್ಗ–II(ಬಿ) | 19 | 28 | 24 | 9 | 4 | 4 | 5 | 93 |
| ಪ್ರವರ್ಗ–III(ಎ) | 19 | 28 | 24 | 9 | 4 | 4 | 5 | 93 |
| ಪ್ರವರ್ಗ–III(ಬಿ) | 23 | 35 | 30 | 11 | 6 | 5 | 6 | 116 |
| ಒಟ್ಟು | 467 | 698 | 585 | 229 | 113 | 112 | 119 | 2323 |

<u>ಟಿಪ್ಪಣಿ:</u> ಪ್ರಕಟಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಸಮಿತಿಯ ನಿರ್ಣಯಕ್ಕೆ ಒಳಪಟ್ಟಿರುತ್ತದೆ.

2. **<u>ಅರ್ಜಿಯ ಶುಲ್ಕ:–</u>**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ರೂ. 300/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 | ರೂ. 100/– |

2.1 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

* ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ:01.06.2012
* ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:30.06.2012 (ಸಂಜೆ 5:00 ಗಂಟೆಯವರೆಗೆ).
* ಬ್ಯಾಂಕ್‌ನಲ್ಲಿ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ:04.07.2012

**<u>ಅರ್ಹತಾ ಷರತ್ತುಗಳು:–</u>**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಸಮಿತಿಯು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ

ಸೀಮಿತವಾಗಿರುವುದಿಲ್ಲ. ಅಂಗವಿಕಲರು ಯಾವುದೇ ಹುದ್ದೆಗೆ ನಿಗದಿಪಡಿಸಿದ ಕರ್ತವ್ಯ ಜವಾಬ್ದಾರಿಯನ್ನು ನಿರ್ವಹಿಸಲು ದೈಹಿಕವಾಗಿ ಸಮರ್ಥರೇ ಎಂಬುದನ್ನು ನೇಮಕಾತಿ ಸಮಿತಿ ಪರಿಶೀಲಿಸಿ ದೃಢೀಕರಿಸಿದ ನಂತರವೇ ಅಭ್ಯರ್ಥಿಯ ಆಯ್ಕೆಯನ್ನು ಪರಿಗಣಿಸಲಾಗುವುದು.

3. **ಶೈಕ್ಷಣಿಕ ವಿದ್ಯಾರ್ಹತೆ:** ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಅಧಿಸೂಚಿಸಿದ ಹುದ್ದೆಯ ಮುಂದೆ ಸೂಚಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಖಡ್ಡಾಯವಾಗಿ ಹೊಂದಿರಬೇಕು. ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು On-line ಅರ್ಜಿಯಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.
4. **ವಯೋಮಿತಿ:–** ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

**ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–** (1) ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ. ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

ಅಥವಾ

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:–

1) ನಿರಂತರ ಸೇವೆ ಸಲ್ಲಿಸಿದ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:–** ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

(ಇ) **ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು**

(ಊ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು. (ಪ್ರಮಾಣ ಪತ್ರವನ್ನು ತಹಶೀಲ್ದಾರರಿಂದ ಪಡೆದು ಸಲ್ಲಿಸಬೇಕು).

(ೠ) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಉಪ ಕಂಡಿಕೆ 7.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

5. **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು:–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಡಿ'(ಅನುಬಂಧ–1)

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ 'ಇ'(ಅನುಬಂಧ–2)

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು:–ನಮೂನೆ 'ಎಫ್'(ಅನುಬಂಧ–3)

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂದರೆ ಹಿಂದುಳಿದ ವರ್ಗಗಳ ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೆ ಐದು ವರ್ಷಗಳ ಅವದಿಯೊಳಗಿರಬೇಕು, ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಅರ್ಹರಾದಲ್ಲಿ ಮಾತ್ರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಸೂಚನೆಗಳಲ್ಲಿ ತೋರಿಸಲಾಗಿದೆ. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯಲ್ಲಿ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು ಹಾಗೂ ಅದೇ ಪ್ರಮಾಣ ಪತ್ರವನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಹಾಜರುಪಡಿಸತಕ್ಕದ್ದು. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

6. **ಗ್ರಾಮೀಣ ಅಭ್ಯರ್ಥಿ**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 96 ಸೇನೆನಿ 2005 ದಿನಾಂಕ 10.08.2005 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಅಭ್ಯರ್ಥಿಗಳು ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ಗ್ರಾಮೀಣ ಮೀಸಲಾತಿ ಬಯಸುವವರು ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಮಾಡಿಸಿ ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಸಹ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ) (ಅನುಬಂಧ–4).

ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ಥರಕ್ಕೆ ಸೇರಿಲ್ಲವೆಂದು ದೃಢೀಕರಿಸಲು ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ ನಮೂನೆ–1

7. **ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೆನೆನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ) (ಅನುಬಂಧ–5).

8. **ಅಂಗವಿಕಲ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ – 'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಆರ್‌ಆರ್ 2008 ದಿನಾಂಕ 03–08–2009ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ 29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೆನೆನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯಲ್ಲಿ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು (ಅನುಬಂಧ–6).

9. **ಯೋಜನಾ ನಿರಾಶ್ರಿತ ಅಭ್ಯರ್ಥಿ**

ಸರ್ಕಾರಿ ಆದೇಶ ಡಿಪಿಎಆರ್ 23 ಎಸ್.ಆರ್.ಆರ್. 99 ದಿ:23–11–00ರಂತೆ ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ ದಿನಾಂಕ 27–07–2001 ರಲ್ಲಿ ನಿಗದಿಪಡಿಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶಿಲ್ದಾರ್ ರವರಿಂದ ಆಸ್ತಿಯನ್ನು ಸ್ವಾದೀನಪಡಿಸಿಕೊಂಡಿರುವ ದಿನಾಂಕವನ್ನು ಸ್ಪಷ್ಟವಾಗಿ ನಮೂದಿಸಿರುವ ಪ್ರಮಾಣ ಪತ್ರವನ್ನು ಮತ್ತು ಅವಾರ್ಡ್ ಲೆಟರ್ (Award Letter) ನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು (ಅನುಬಂಧ–7)

10. **ವ್ಯಾಸಂಗ ಪ್ರಮಾಣ ಪತ್ರದ ಬಗ್ಗೆ**

ಕರ್ನಾಟಕ ರಾಜ್ಯದಲ್ಲಿ ಹತ್ತು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅಂದರೆ ಒಂದನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡದಿರುವ ಯಾವುದೇ ಅಭ್ಯರ್ಥಿಯು ಈ ನಿಯಮಗಳ ಅಡಿಯಲ್ಲಿ ಆಯ್ಕೆಗೆ ಅರ್ಹರಾಗುವುದಿಲ್ಲ. ಅಭ್ಯರ್ಥಿಗಳು 10 ವರ್ಷ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಭಂದಪಟ್ಟ ಶಾಲೆಗಳ ಮುಖ್ಯೋಪಾಧ್ಯಾಯರಿಂದ ಪ್ರಮಾಣ ಪತ್ರಗಳನ್ನು ಪಡೆದು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾಗಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

11. **ಸರ್ಕಾರಿ ಸೇವೆಯಲ್ಲಿರುವ ನೌಕರರಿಗೆ**

ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ನೌಕರರು (ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರಿಂದ ಪಡೆದಿಟ್ಟುಕೊಂಡಿರತಕ್ಕದ್ದು) (ಅನುಬಂಧ–8.)

12. ವಿಶೇಷ ಸೂಚನೆಗಳು:–

**1)** ಹುದ್ದೆಗೆ ನಿಗದಿಪಡಿಸಿದ ಶುಲ್ಕ(ಅರ್ಜಿಯನ್ನು ಭರ್ತಿ ಮಾಡಿದ ನಂತರ ಪಾವತಿಸತಕ್ಕದ್ದು)ಪಾವತಿ ರಸೀತಿ(ಚಲನ್ ಪತ್ರಿ).

**2)** ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ವರ್ಗಾವಣೆ ಪ್ರಮಾಣ ಪತ್ರ/ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗವನ್ನು ಸಲ್ಲಿಸತ್ಕಕದ್ದು ಹಾಗೂ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ವಯೋಮಿತಿ ಮೀರಿರಬಾರದು.

**3)** ನಿರಾಪೇಕ್ಷಣಾ ಪತ್ರ (No Objection Certificate) (ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ)

4) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ / ಮಾಜಿ ಸೈನಿಕ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಬಿಡುಗಡೆ ಹೊಂದಿರುವ ಕಾರಣಗಳ ಪ್ರಮಾಣ ಪತ್ರ (ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿದ್ದಲ್ಲಿ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ) (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

5) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಮತ್ತು ಪ್ರವರ್ಗ–3ಬಿ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)

6) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)

7) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

8) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ವಯೋಮಿತಿ ಸಡಿಲಿಕೆಗಾಗಿ ಮೀಸಲಾತಿ ಕೋರಿದ್ದಲ್ಲಿ).

9) ವಿಧವೆಯಾಗಿದ್ದಲ್ಲಿ ತಹಶೀಲ್ದಾರಿಂದ ಮರು ಮದುವೆಯಾಗದಿರುವ ಬಗ್ಗೆ ಪ್ರಮಾಣ ಪತ್ರ (ವಯೋಮಿತಿ ಸಡಿಲಿಕೆಗಾಗಿ).

**ಸೂಚನೆಗಳು:–**

(1) ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ವಿವರಗಳನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು.

(2) ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವಾಗುವುದು.

(3) **ಹುದ್ದೆಯ ಕರ್ತವ್ಯ ಮತ್ತು ಜವಾಬ್ದಾರಿಯ ಕಾರ್ಯನಿರ್ವಹಣೆ:–** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿರುವ ಜಿಲ್ಲಾ ಆಸ್ಪತ್ರೆಗಳು, ಸಮುದಾಯ ಆರೋಗ್ಯ ಕೇಂದ್ರಗಳು, ತಾಲ್ಲೂಕು ಆಸ್ಪತ್ರೆಗಳು, ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿರುವ ಕ್ಲಿನಿಕಲ್ ಕಾರ್ಯಗಳ ಸಹಾಯಕ್ಕೆ ಮಾತ್ರ ಬಳಸಿಕೊಳ್ಳಲು(for clinical support only) ಸರ್ಕಾರಿ ಆದೇಶ ಸಂಖ್ಯೆ:ಆಕುಕ/342/ಹೆಚ್‌ಎಸ್‌ಎಂ/2009, ದಿನಾಂಕ:07.05.2012ರಲ್ಲಿ ಅಧಿಸೂಚಿಸಿದ ಒಟ್ಟು 2323 ಹಾಸ್ಪಿಟಲ್ ಅಟೆಂಡೆಂಟ್ ಗ್ರೇಡ್–II, ಗ್ರೂಪ್'ಡಿ' ಜಿಲ್ಲಾವಾರು ಖಾಲಿ ಹುದ್ದೆಗಳಿಗೆ ವೇತನ ಶ್ರೇಣಿ ರೂ. 9600–200–12000–250–13000–300–14200–350–14550ರಲ್ಲಿ ನೇಮಕಾತಿ ಹೊಂದಿ ಕರ್ತವ್ಯ ನಿರ್ವಹಿಸುವ ಅಭ್ಯರ್ಥಿಗಳು ಆಸ್ಪತ್ರೆಗಳಲ್ಲಿನ ಕ್ಲಿನಿಕಲ್ ಕಾರ್ಯಗಳ ಸಹಾಯಕ್ಕೆ ಅಂದರೆ ಆಸ್ಪತ್ರೆಗಳಲ್ಲಿ ಚಿಕಿತ್ಸೆಗೆ ಒಳಪಡುವ ರೋಗಿಗಳಿಗೆ, ಹೆರಿಗೆ ಸಮಯದಲ್ಲಿ, ಶಸ್ತ್ರಚಿಕಿತ್ಸಾ ಕೊಠಡಿಗಳಲ್ಲಿ ಉಪಕರಣಗಳನ್ನು ಸಂಸ್ಕರಿಸುವುದು, ಗಾಯಾಳುಗಳಿಗೆ ಬ್ಯಾಂಡೇಜ್ ಮಾಡುವುದು, ರೋಗಿಗಳನ್ನು ಕೊಠಡಿಗಳಿಗೆ ಸ್ಥಳಾಂತರಿಸುವುದು, ಮರಣೋತ್ತರ ಪರೀಕ್ಷೆಯಲ್ಲಿ ವೈದ್ಯರಿಗೆ ಸಹಾಯ ಮಾಡುವ ಕೆಲಸ ಹಾಗೂ ಆಸ್ಪತ್ರೆಗಳಲ್ಲಿ ಅಟೆಂಡೆಂಟ್ ಗ್ರೂಪ್'ಡಿ' ಹುದ್ದೆಯ ಕೆಲಸ ಕಾರ್ಯಗಳನ್ನು ಹಾಗೂ ಸಂಬಂಧಪಟ್ಟ ವೈದ್ಯಾಧಿಕಾರಿಗಳು/ಆಡಳಿತ ವೈದ್ಯಾಧಿಕಾರಿಗಳು ಸೂಚಿಸುವ ಗ್ರೂಪ್'ಡಿ' ಗೆ ಸಂಬಂಧಿಸಿದ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ನಿರ್ವಹಿಸತಕ್ಕದ್ದು ಹಾಗೂ ವಿದ್ಯಾರ್ಹತೆ ಆಧಾರದ ಮೇಲೆ ವೃಂದ ಬದಲಾವಣೆಗೆ ಅವಕಾಶವಿರುವುದಿಲ್ಲ.

13. **ದುರ್ನಡತೆ:–** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾಗುವ ವೈದ್ಯಕೀಯ ಪರೀಕ್ಷೆಯಲ್ಲಿ / ಮೂಲ ದಾಖಲಾತಿ ಪರಿಶೀಲನೆ ಸಮಯದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು/ ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

ಸದಸ್ಯ ಕಾರ್ಯದರ್ಶಿ.
ವಿಶೇಷ ನೇಮಕಾತಿ ಸಮಿತಿ ಹಾಗೂ
ಮುಖ್ಯ ಆಡಳಿತಾಧಿಕಾರಿಗಳು
ಆರೋಗ್ಯ ಮತ್ತು ಕು.ಕ.ಸೇವೆಗಳು.

**ಅನುಬಂಧ–1**

**(ಪ.ಜಾ. / ಪ.ಪಂ.ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಡಿ**

(ನಿಯಮ 3ಎ(2) (3) ನ್ನು ನೋಡಿ)

ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ.

**ಪ್ರಮಾಣ ಪತ್ರ**

__________ರಾಜ್ಯದ / ಕೇಂದ್ರಡಳಿತ ಪ್ರದೇಶದ *________ಜಿಲ್ಲೆಯ / ವಿಭಾಗದ______ಗ್ರಾಮ / ಪಟ್ಟಣ * ನಿವಾಸಿಯಾದ ಶ್ರೀ / ಶ್ರೀಮತಿ ________ ಎಂಬುವವರ ಮಗ / ಮಗಳಾದ ಶ್ರೀ / ಶ್ರೀಮತಿ ______ಇವರು ಅನುಸೂಚಿತ ಜಾತಿ / ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ / ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

- ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950
- ಸಂವಿಧಾನ ( ಅನುಸೂಚಿತ ಬುಡಕಟ್ಟುಗಳು) ಆದೇಶ 1950
- ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ,1950.
- ಸಂವಿಧಾನ ( ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಢಳಿತ ಪ್ರದೇಶಗಳು) ಆದೇಶ, 1951

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956 , ಮುಂಬಾಯಿ ರಾಜ್ಯ, ಪುನರ್ ರಚನಾ ಅಧಿನಿಯಮ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971 ರ ಮೂಲಕ ತಿದ್ದುಪಡಿಯಾದಂತೆ).

- ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ 1956.
- ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976 ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟು ಆದೇಶ 1959.
- ಸಂವಿಧಾನ (ದಾದರ್ ಮತ್ತು ನಗರ ಹವೇಲಿ ) ಅನುಸೂಚಿತ ಜಾತಿಗಳ ಆದೇಶ, 1962.
- ಸಂವಿಧಾನ (ಪಾಂಡಿಚೆರಿ) ಅನುಸೂಚಿತ ಜಾತಿಗಳ ಆದೇಶ, 1964.
- ಸಂವಿಧಾನ ಅನುಸೂಚಿತ ಬುಡಕಟ್ಟುಗಳ (ಉತ್ತರ ಪ್ರದೇಶ) ಅದೇಶ1967.
- ಸಂವಿಧಾನ (ಗೋವಾ , ದಮನ್ ಮತ್ತು ದೀವ್) ಅನುಸೂಚಿತ ಜಾತಿ / ಬುಡಕಟ್ಟುಗಳ ಆದೇಶ,1988.
- ಸಂವಿಧಾನ (ನಾಗಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

1. ಶ್ರೀ/ ಶ್ರೀಮತಿ ಕುಮಾರಿ *____________ಮತ್ತು / ಅಥವಾ ಅವನ*/ಅವಳ* ಕುಟುಂಬವು______________________ರಾಜ್ಯ/ಕೇಂದ್ರಾಡಳಿತ ಪ್ರದೇಶದ_________ಜಿಲ್ಲಾ / ವಿಭಾಗದ *___________ಗ್ರಾಮ / _________ಪಟ್ಟಣದ ಸಾಮಾನ್ಯ ನಿವಾಸಿ (ಗಳು).

ಸಹಿ:

ತಹಶೀಲ್ದಾರ್

ಸ್ಥಳ :                                                            ಪದನಾಮ

ದಿನಾಂಕ :                                                          ಕಛೇರಿಯ ಮೊಹರಿನೊಂದಿಗೆ

ರಾಜ್ಯ / ಕೇಂದ್ರಾಡಳಿತ ಪ್ರದೇಶ *

ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟುಬಿಡಿ / ಹೊಡೆದು ಹಾಕಿ,

ಸೂಚನೆ: – ಇಲ್ಲಿ ಉಪಯೋಗಿಸಿದ “ ಸಾಮಾನ್ಯ ನಿವಾಸಿಗಳು” ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950 ರ 20 ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತವೆ.

ಭಾರತ ಸರ್ಕಾರದ ಪತ್ರ ಸಂಖ್ಯೆ : ಬಿಸಿ 12028/2/78 ಎಸ್ ಸಿಟಿ ಗೃಹ ಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ: 13/02/1974 ಇಎಸ್ ಟಿ) ದಿನಾಂಕ 5ನೇ ಆಗಸ್ಟ್ 1975 ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು, ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

